ಲಿಖಿತ ಮೂಲಕ ಉತ್ತರಿಸುವ
ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಸೋಮವಾರ, ದಿನಾಂಕ : 01 ನೇ ಫೆಬ್ರುವರಿ, 2021

ಬೋಧಕೇತರ ಸಿಬ್ಬಂದಿ/ಅಧಿಕಾರಿಗಳ ವೃಂದ ಮತ್ತು ನೇಮಕಾತಿ ಹಾಗೂ ಬಡ್ತಿ ಕುರಿತು

ಶ್ರೀಹೆಚ್.ಎಂ.ರಮೇಶ್‌ಗೌಡ (ವಿಧಾನಸಭೆಯಿಂದಚುನಾಯಿತರಾದವರು):-

118 (120) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕೇತರ ಸಿಬ್ಬಂದಿ/ಅಧಿಕಾರಿಗಳ ವೃಂದ ಮತ್ತು ನೇಮಕಾತಿ ಹಾಗೂ ಬಡ್ತಿ ನಿಯಮಗಳು ತಿದ್ದುಪಡಿಯಾಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಹಾಗಿದ್ದಲ್ಲಿ, ಹಾಲಿ ಇರುವ ವೃಂದ ಮತ್ತು ನೇಮಕಾತಿ ಹಾಗೂ ಬಡ್ತಿ ನಿಯಮಗಳು ಯಾವ ದಿನಾಂಕದಿಂದ ಜಾರಿಯಲ್ಲಿವೆ ; ನಿಯಮ (ಆದೇಶ)ಗಳ ಪ್ರತಿಗಳೊಂದಿಗೆ ಸಂಪೂರ್ಣ ಮಾಹಿತಿ ನೀಡುವುದು ;

(ಇ) ಬೋಧಕ ಸಿಬ್ಬಂದಿ/ಅಧಿಕಾರಿಗಳ ವೃಂದ ಮತ್ತು ನೇಮಕಾತಿ ಹಾಗೂ ಬಡ್ತಿ ನಿಯಮಗಳು ಹಾಲಿ ಯಾವ ದಿನಾಂಕದಿಂದ ಜಾರಿಯಲ್ಲಿವೆ ; ಈ ಹಿಂದೆ ಜಾರಿಯಲ್ಲಿದ್ದ ಮತ್ತು ಹಾಲಿ ಚಾಲ್ತಿಯಲ್ಲಿರುವ ಆದೇಶಗಳ ಪ್ರತಿಗಳನ್ನು ನೀಡುವುದು ;

(ಈ) ಹಾಲಿ ಇರುವ ಬೋಧಕೇತರ ಸಿಬ್ಬಂದಿ/ಅಧಿಕಾರಿಗಳ ವೃಂದ ಮತ್ತು ನೇಮಕಾತಿ ಹಾಗೂ ಬಡ್ತಿ ನಿಯಮಗಳ ತಿದ್ದುಪಡಿ ಕುರಿತು ಸರ್ಕಾರ ಅಗತ್ಯ ಕ್ರಮಕೈಗೊಳ್ಳುವುದೇ; ಕೈಗೊಂಡಿದ್ದಲ್ಲಿ, ಯಾವ ರೀತಿ ಕ್ರಮವಹಿಸಲಾಗುತ್ತಿದೆ ; (ಪೂರ್ಣ ಮಾಹಿತಿ ನೀಡುವುದು)

(ಉ) ವೃಂದ ಮತ್ತು ನೇಮಕಾತಿ ಹಾಗೂ ಬಡ್ತಿ ನಿಯಮಗಳ ತಿದ್ದುಪಡಿ ಕುರಿತು ಸರ್ಕಾರಕ್ಕಿರುವ ತೊಂದರೆಗಳೇನು ? (ಪೂರ್ಣ ಮಾಹಿತಿ ನೀಡುವುದು)